KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೪ | ಬೆಂಗಳೂರು, ಗುರುವಾರ ಜನವರಿ ೧, ೨೦೦೯ (ಪುಷ್ಯ ೧೧, ಶಕ ವರ್ಷ ೧೯೩೦) | ಸಂಚಿಕೆ ೧ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ದೊರೆರಾಜುಲುನಾಯ್ಡು, ನೋಟರಿ, ಬೆಂಗಳೂರು ಇವರ ಕರ್ತವ್ಯ ಲೋಪ–ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ/ಎಡಿಎಂ.1(ಬಿ)150/2007, ದಿನಾಂಕ 12–7–07 ಮತ್ತು ಸಿಸಿಸಿ/ಆಡಳಿತ ವಿಭಾಗ.1(ಬಿ) 240/07, ದಿನಾಂಕ 17–10–07 ವಿಲೇಖನಾಧಿಕಾರಿಗಳು ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು ಇವರಿಂದ.
2. ಸರ್ಕಾರದ ಪತ್ರ ಸಂಖ್ಯೆ ಲಾ 43 ಎಲ್‌ಸಿಎಲ್ 07, ದಿನಾಂಕ 14–8–07, 30–4–08 ಹಾಗೂ 11–6–08.
3. ನೋಟರಿಯವರ ಮನವಿ ದಿನಾಂಕ 10–7–08.
4. ಸರ್ಕಾರದ ಪತ್ರ ಸಂಖ್ಯೆ ಲಾ 85 ಎಲ್‌ಸಿಎಲ್ 08, ದಿನಾಂಕ 27–8–08 ಹಾಗೂ 22–9–08.

**ಪ್ರಸ್ತಾವನೆ :**

ಶ್ರೀ ದೊರೆರಾಜುಲುನಾಯ್ಡು, ನೋಟರಿ, ಬೆಂಗಳೂರು ಇವರು ನೋಟರಿ ನಿಯಮಾವಳಿಗಳು 1956ರ ನಿಯಮ 11 ಮತ್ತು 14 ರನ್ವಯ 2006 ಹಾಗೂ 2007ನೇ ಸಾಲುಗಳಿಗೆ ಯಾವುದೇ ಮಾಹಿತಿ/ವರದಿಯನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಸಲ್ಲಿಸಿ ರಿಜಿಸ್ಟರು ಹಾಗೂ ಪೂರಕ ದಾಖಲೆಗಳನ್ನು ತಪಾಸಣೆಗೆ ಒಳಪಡಿಸಿ ತಪಾಸಿಸಿಕೊಂಡಿಲ್ಲವೆಂದು ಈ ಬಗ್ಗೆ ಶ್ರೀಯುತರಿಗೆ ನೋಟೀಸ್ ಜಾರಿ ಮಾಡಿದ್ದು ಅದನ್ನು 27–10–07ರಂದು ಸ್ವೀಕರಿಸಿಯೂ ನೋಟರಿ ರಿಜಿಸ್ಟರ್ ಮತ್ತು ರಿಟರ್ನ್ಸ್ ತಪಾಸಣೆಗೆ ಸಲ್ಲಿಸಿಲ್ಲವೆಂದು ಮೇಲೆ (1)ರಲ್ಲಿ ಓದಲಾದ ದಿನಾಂಕ 12–7–07 ಮತ್ತು 17–10–07ರ ಪತ್ರಗಳಲ್ಲಿ ವಿಲೇಖನಾಧಿಕಾರಿಗಳು ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು ರವರು ತಿಳಿಸಿದ್ದರು. ಆ ಮೇರೆಗೆ ಸರ್ಕಾರದಿಂದಲೂ ಉಲ್ಲೇಖಿತ (1)ರ ಪತ್ರಗಳಲ್ಲಿ ತಿಳುವಳಿಕೆಯೊಂದಿಗೆ ಕಾರಣಕೇಳುವ ಮೂಲಕ ಲಿಖಿತ ವಿವರಣೆ ನೀಡುವಂತೆ ಕೋರಲಾಗಿತ್ತು. ಅವುಗಳನ್ನು ನೋಂದಣಿ ಅಂಚೆ ಮೂಲಕ ಹಾಗೂ ನಾಜರ್ ಮೂಲಕ ಖುದ್ದಾಗಿ ಸ್ವೀಕರಿಸಿ, ನೋಟರಿಯವರು ಮೇಲೆ ಓದಲಾದ (3)ರ ದಿನಾಂಕ 10–7–08ರ ತಮ್ಮ ಪತ್ರದಲ್ಲಿ ಅನಾರೋಗ್ಯದ ನಿಮಿತ್ತ ತಾವು ಜ್ಞಾಪನಶಕ್ತಿ ಕುಂಠಿತಗೊಂಡಿದ್ದು, 2006ನೇ ಸಾಲಿನ ಕೊನೆಯಿಂದ ಮೇಯೋಹಾಲಿಗೆ ಹೋಗುವುದನ್ನು ನಿಲ್ಲಿಸಿ ನೋಟರಿ ಕರ್ತವ್ಯವನ್ನು

ನಿರ್ವಹಿಸಿರುವುದಿಲ್ಲವಾದ್ದರಿಂದ 2007 ಹಾಗೂ 2008ನೇ ಸಾಲುಗಳಿಗೆ ರಿಜಿಸ್ಟರುಗಳನ್ನು ತೆರೆದಿರುವುದಿಲ್ಲವಾದ್ದರಿಂದ ಅವುಗಳನ್ನು ಸಲ್ಲಿಸುವುದರಿಂದ ಕ್ಷಮೆ ನೀಡುವಂತೆ ಮತ್ತು 2006ನೇ ಸಾಲಿನ ರಿಜಿಸ್ಟರುಗಳನ್ನು ದಿನಾಂಕ 15–7–08 ರೊಳಗೆ ಸಲ್ಲಿಸುವುದಾಗಿ ತಿಳಿಸಿದ್ದಾರೆ. ಆದರೆ ಯಾವುದೇ ರಿಜಿಸ್ಟರ್ ಸಲ್ಲಿಸಿರುವುದಿಲ್ಲ. ಆ ಬಗ್ಗೆ ಉಲ್ಲೇಖಿತ (4)ರ ಸರ್ಕಾರಿ ಪತ್ರಗಳಲ್ಲಿ ನೋಟರಿ ಅಧಿನಿಯಮ 10(ಸಿ)ರನ್ವಯ ಕ್ರಮಕೈಗೊಳ್ಳುವ ಬಗ್ಗೆ ಅಭಿಪ್ರಾಯ ಕೋರಲಾಗಿದ್ದು ಅವುಗಳನ್ನು ಸ್ವೀಕರಿಸಿಯೂ ಯಾವುದೇ ಉತ್ತರ ನೀಡಿಲ್ಲ. 3 ವರ್ಷಗಳಿಂದ ನೋಟರಿ ಕರ್ತವ್ಯ ನಿರ್ವಹಿಸದೇ ಇರುವುದು ಅನಾರೋಗ್ಯದಿಂದ ಜ್ಞಾಪಕ ಶಕ್ತಿಕಡಿಮೆಯಾಗಿರುವುದಾಗಿ ತಿಳಿಸಿರುವುದು ಮತ್ತು ಇವರಿಂದ ಸಾರ್ವಜನಿಕರು ನೋಟರಿ ಸೌಲಭ್ಯ/ಸೇವೆಯಿಂದ ವಂಚಿತರಾಗಿರುವುದನ್ನು ಪರಿಗಣಿಸಿ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 85 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ದೊರೆರಾಜುಲುನಾಯ್ಡು, ನೋಟರಿ ಬೆಂಗಳೂರು ಇವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(ಸಿ) ಮತ್ತು ನೋಟರಿ ನಿಯಮಾವಳಿಗಳು, 1956ರ ನಿಯಮ 13(12)(ಬಿ)(1) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1639

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಂದಾಯ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಕಂಇ 148 ಎಲ್‌ಆರ್‌ಎ 2008 ಬೆಂಗಳೂರು, ದಿನಾಂಕ: 13ನೇ ನವೆಂಬರ್ 2008.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 48 ಎಲ್‌ಆರ್‌ಎ 2008, ದಿನಾಂಕ 13–10–2008ರ ಪಟ್ಟಿಯ ಕ್ರ.ಸಂ. 20(1)ರಲ್ಲಿ "ಶ್ರೀ ಮುನಿರಾಜು" ಎಂಬುದರ ಬದಲಾಗಿ ಶ್ರೀ ಮುನಿರಾಜು "ಎಸ್.ಸಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1601

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯಃ** ಶ್ರೀಮತಿ. ಎನ್. ದೇವಕುಮಾರಿ, ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಹಾಗೂ ಶ್ರೀ. ಪಿ. ಶಿವಣ್ಣ ಕಿರಿಯ ಅಭಿಯಂತರರು ಇವರುಗಳ ವಿರುದ್ದ ಜಂಟಿ ಇಲಾಖಾ ವಿಚಾರಣೆ- ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಒದಲಾಗಿದೆಃ**
1. ಸರ್ಕಾರಿ ಆದೇಶ ಸಂಃ ಸಿಆಸುಇ 129 ಕೆಇವಿ 2007 ದಿಃ24-10-2007.
2. ಸರ್ಕಾರಿ ಆದೇಶ ಸಂಃ ಸಿಆಸುಇ 129 ಕೆಇವಿ 2007 ದಿಃ10-04-2008.
3. ಶ್ರೀಮತಿ. ಎನ್. ದೇವಕುಮಾರಿ, ಕೆ.ಎ.ಎಸ್(ನಿ) ಅಧಿಕಾರಿ ಇವರ ಮನವಿ ದಿಃ19-07-08.

**ಪ್ರಸ್ತಾವನೆಃ**

ಶ್ರೀಮತಿ. ಎನ್. ದೇವಕುಮಾರಿ, ಕೆ.ಎ.ಎಸ್ ಅಧಿಕಾರಿ (ನಿ) ಇವರು ಬೆಂಗಳೂರಿನ ಮಹಾತ್ಮ ಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ದಿ ಸಂಸ್ಥೆಯಲ್ಲಿ ನಿರ್ದೇಶಕರಾಗಿ ಃ ವಿಶೇಷ ಕರ್ತವ್ಯಾಧಿಕಾರಿಯಾಗಿ ಮತ್ತು ಶ್ರೀ. ಪಿ. ಶಿವಣ್ಣ, ಇವರು ಸದರಿ ಸಂಸ್ಥೆಯಲ್ಲಿ ಕಿರಿಯ ಅಭಿಯಂತರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ವಿಂಡ್ ಜನರೇಟರ್ ಖರೀದಿಯಲ್ಲಿ ಅವ್ಯವಹಾರ ನಡೆಸಿದ್ದರೆನ್ನಲಾದ ಅಪಾದನೆಗಳ ಸಂಬಂಧ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿಃ 24-10-07 ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ದದ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ. ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು

ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಹಾಗೂ ಮೇಲೆ ಕ್ರಮ ಸಂಃ 2 ರಲ್ಲಿ ಓದಲಾದ ಆದೇಶದಲ್ಲಿ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಬದಲಿಗೆ ಉಪ ನಿರ್ದೇಶಕರು (ಗ್ರಾಮೀಣ ಇಂಧನ ಕಾರ್ಯಕ್ರಮ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯಾಗಿ ನೇಮಕಗೊಂಡಿರುವ ನಿವೃತ್ತ ನ್ಯಾಯಾಧೀಶರಾದ ಶ್ರೀ.ವಿ.ಎನ್.ಕುಲಕರ್ಣಿ, ಇವರು ನಿಧನರಾಗಿರುವ ಪ್ರಯುಕ್ತ ಇವರ ಬದಲಿಗೆ ಬೇರೆ ವಿಚಾರಣಾಧಿಕಾರಿಗಳನ್ನು ನೇಮಿಸಲು ಪರಿಗಣಿಸಿ ಅದರಂತೆ ಈ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಃ ಸಿಆಸುಇ 129 ಕೆಇವಿ 2007 ಬೆಂಗಳೂರು ದಿಃ 05ನೇ ಸೆಪ್ಟೆಂಬರ್ 08**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ.ಎನ್.ದೇವಕುಮಾರಿ ಕೆ.ಎ.ಎಸ್ ಅಧಿಕಾರಿ (ನಿ) ಹಾಗೂ ಶ್ರೀ. ಪಿ. ಶಿವಣ್ಣ, ಕಿರಿಯ ಅಭಿಯಂತರರು ಇವರುಗಳ ವಿರುದ್ದ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ದಿಃ 24-10-07 ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾದ ಶ್ರೀ. ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಬದಲಿಗೆ ಶ್ರೀ. ಎಚ್.ವಿ. ರಾಮಚಂದ್ರರಾವ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಆದಷ್ಟು ಶೀಘ್ರ ಮುಕ್ತಾಯಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಉಪ ನಿರ್ದೇಶಕರು (ಗ್ರಾಮೀಣ ಇಂಧನ ಕಾರ್ಯಕ್ರಮ)ಗ್ರಾ.ಅ.ಮತ್ತು ಪಂ.ರಾಜ್ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ ಇವರೇ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಮುಂದುವರೆಯಲಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್. 1278ಎ

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಗ್ರೂಪ್ – ಎ ಮತ್ತು ಗ್ರೂಪ್ –ಬಿ ವೃಂದದ ಹುದ್ದೆಗಳನ್ನು ಧಾರವಾಡ ಮತ್ತು ಗುಲ್ಬರ್ಗಾದ ಅಡ್ವೋಕೇಟ್ ಜನರಲ್ ಘಟಕ ಕಛೇರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್ಎಜಿ 2008, ದಿನಾಂಕ 19–6–2008.

2. ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಆರ್‌ಪಿಎಸ್ 117/2004, ದಿ: 4–6–2008.

3. ಅಡ್ವೋಕೇಟ್ ಜನರಲ್ ಅ.ಸ. ಪತ್ರ ಸಂಖ್ಯೆ: 92 ಎಜಿಪಿ/08–09, ದಿನಾಂಕ 20–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಧಾರವಾಡ ಮತ್ತು ಗುಲ್ಬರ್ಗಾದ ಎರಡು ಅಡ್ವೋಕೇಟ್ ಜನರಲ್ ಘಟಕ ಕಛೇರಿಗೆ ಅಗತ್ಯವಿರುವ ಸಿಬ್ಬಂದಿಯನ್ನು ಸೃಜಿಸಿ ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ನಂತರ ಓದಲಾದ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಮತ್ತು ಗುಲ್ಬರ್ಗಾದ ಸಂಚಾರಿ ಪೀಠವು ದಿನಾಂಕ 7–7–2008ರಂದು ಕಾರ್ಯಾರಂಭಿಸಲಾಗುವುದೆಂದು ತಿಳಿಸಿರುತ್ತಾರೆ. ನಂತರ ಓದಲಾದ ಕ್ರಮ ಸಂಖ್ಯೆ (3)ರ ಅಡ್ವೋಕೇಟ್ ಜನರಲ್‌ರವರ ಅರೆ ಸರ್ಕಾರಿ ಪತ್ರದಲ್ಲಿ ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಕೆಲವೊಂದು ಗ್ರೂಪ್–ಎ ಮತ್ತು ಗ್ರೂಪ್–ಬಿ ಲಿಪಿಕ ವೃಂದದ ಹುದ್ದೆಗಳನ್ನು ಧಾರವಾಡ ಮತ್ತು ಗುಲ್ಬರ್ಗಾದ ಘಟಕ ಕಛೇರಿಗೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

ಆ ಮೇರೆಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 97 ಎಲ್ಎಜಿ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2008.**

ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಈ ಕೆಳಕಂಡ ಲಿಪಿಕ ವೃಂದದ ಹುದ್ದೆಗಳನ್ನು ಹೊಸದಾಗಿ ಸ್ಥಾಪಿಸಲಾದ ಧಾರವಾಡ ಮತ್ತು ಗುಲ್ಬರ್ಗಾದ ಘಟಕ ಕಛೇರಿಗೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| Sl. No. | Designation | Transfer of posts from Head Office | To Unit Office at Dharwad | To Unit Office at Gulbarga |
|---|---|---|---|---|
| 1 | Asst. Admn. Officers | 1 | 1 | - |
| 2 | Section Officers | 2 | 1 | 1 |
| 3 | Translator | 1 | - | 1 |
| | **Total** | **4** | **2** | **2** |

ಇದನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ :** ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಕಾನೂನು ಅಧಿಕಾರಿ ವೃಂದದ ಹುದ್ದೆಗಳನ್ನು ಧಾರವಾಡ ಮತ್ತು ಗುಲ್ಬರ್ಗಾದ ಅಡ್ವೋಕೇಟ್ ಜನರಲ್ ಘಟಕ ಕಛೇರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಲಾ 80 ಎಲ್ಎಜಿ 2008, ದಿನಾಂಕ 19–6–2008.

2. ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಆರ್‌ಪಿಎಸ್ 117/2004, ದಿ: 4–6–2008.

3. ಅಡ್ವೋಕೇಟ್ ಜನರಲ್ ಅ.ಸ. ಪತ್ರ ಸಂಖ್ಯೆ 96 ಎಜಿಪಿ/08–09, ದಿನಾಂಕ 28–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಧಾರವಾಡ ಮತ್ತು ಗುಲ್ಬರ್ಗಾದ ಎರಡು ಅಡ್ವೋಕೇಟ್ ಜನರಲ್ ಘಟಕ ಕಛೇರಿಗೆ ಅಗತ್ಯವಿರುವ ಸಿಬ್ಬಂದಿಯನ್ನು ಸೃಜಿಸಿ ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ನಂತರ ಓದಲಾದ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಮತ್ತು ಗುಲ್ಬರ್ಗಾದ ಸಂಚಾರಿ ಪೀಠವು ದಿನಾಂಕ 7–7–2008ರಂದು ಕಾರ್ಯಾರಂಭಿಸಲಾಗುವುದೆಂದು ತಿಳಿಸಿರುತ್ತಾರೆ. ನಂತರ ಓದಲಾದ ಕ್ರಮ ಸಂಖ್ಯೆ (3)ರ ಅಡ್ವೋಕೇಟ್ ಜನರಲ್‌ರವರ ಅರೆ ಸರ್ಕಾರಿ ಪತ್ರದಲ್ಲಿ ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಕೆಲವೊಂದು ಕಾನೂನು ಅಧಿಕಾರಿ ವೃಂದದ ಹುದ್ದೆಗಳನ್ನು ಧಾರವಾಡ ಮತ್ತು ಗುಲ್ಬರ್ಗಾದ ಘಟಕ ಕಛೇರಿಗೆ ಸ್ಥಳಾಂತರಿಸುವಂತೆ ಕೊರಿರುತ್ತಾರೆ.

ಆ ಮೇರೆಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 98 ಎಲ್ಎಜಿ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2008.**

ಅಡ್ವೋಕೇಟ್ ಜನರಲ್ ಮುಖ್ಯ ಕಛೇರಿಯ ಈ ಕೆಳಕಂಡ ಕಾನೂನು ಅಧಿಕಾರಿಗಳ ವೃಂದದ ಹುದ್ದೆಗಳನ್ನು ಹೊಸದಾಗಿ ಸ್ಥಾಪಿಸಲಾದ ಧಾರವಾಡ ಮತ್ತು ಗುಲ್ಬರ್ಗಾದ ಘಟಕ ಕಛೇರಿಗೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| Sl. No. | Designation | Transfer of posts from Head Office | To Unit Office at Dharwad | To Unit Office at Gulbarga |
|---|---|---|---|---|
| 1 | Addl. State Public Prosecutor | 1 | - | 1 |
| 2 | Addl. Govt. Advocates | 6 | 3 | 3 |
| 3 | High Court Govt. Pleaders | 10 | 5 | 5 |
| | **Total** | **17** | **8** | **9** |

ಇದನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1107

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಜೆ.ಬಿ. ಕುಮಾರಸ್ವಾಮಿ, ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇವರ ವಿರುದ್ಧ ಶಿಸ್ತು ಕ್ರಮ – ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ಇವರ ಪತ್ರದ ಸಂ: ಕೈಜಇ/ಆಡಳಿತ/ಸಿಬ್ಬಂದಿ/ಸಿ1/37/ವಿಚಾರಣೆ/2001–02, ದಿ: 10–7–2001.
2. ಕಾರಣ ಕೇಳುವ ನೋಟೀಸ್ ದಿ: 15–6–2002, 18–12–2002, 7–1–2005.
3. ಸರ್ಕಾರಿ ಆದೇಶ ಸಂ: ವಾಕೈ 230 ಕೈಸೇವಿ 2001, ದಿ: 19–7–2005.
4. ವಿಚಾರಣಾಧಿಕಾರಿಗಳ ವರದಿ ದಿನಾಂಕ 2–6–2007.
5. ವಿಚಾರಣಾ ವರದಿಯನುಸಾರ ಎರಡನೇ ಕಾರಣ ಕೇಳುವ ನೋಟೀಸ್ ದಿ: 18–6–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು, ಇವರು ದಿ: 18–3–2000 ರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಿ ಹಾಗೂ ಕಛೇರಿಯ ಹಣ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ದುರುಪಯೋಗಪಡಿಸಿಕೊಂಡಿರುವುದರಿಂದ 1957ರ ಕರ್ನಾಟಕ ಸರ್ಕಾರಿ ಸೇವಾ ಸಿ.ಸಿ.ಎ. ನಿಯಮಾವಳಿಗಳ ಪ್ರಕಾರ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದೆಂದು ಸದರಿ ಅಧಿಕಾರಿಗೆ ಪತ್ರದ ಮೂಲಕ ತಿಳಿಸಿದ್ದಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ಕೈಮಗ್ಗ ಮತ್ತು ಜವಳಿ ಇಲಾಖೆ, ಚಿಕ್ಕಮಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿ: 18–3–2000 ರಿಂದ ಅನಧಿಕೃತ ಗೈರು ಹಾಜರಾಗಿದ್ದು ಹಾಗೂ ತಮ್ಮ ಹುದ್ದೆಯ ಪ್ರಭಾರವನ್ನು ಬೇರೆ ಯಾರಿಗೂ ವಹಿಸಿಕೊಡದೇ ತಮ್ಮ ವಶದಲ್ಲಿದ್ದ ಸರ್ಕಾರದ ಹಣ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ, ದೋಷಾರೋಪಣ ಪಟ್ಟಿಯೊಂದಿಗೆ ನೋಟೀಸ್‌ನ್ನು ಜಾರಿ ಮಾಡಲಾಗಿದ್ದು, ಸದರಿ ನೋಟೀಸ್‌ಗೆ 15 ದಿನಗಳೊಳಗಾಗಿ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಸದರಿ ನೋಟೀಸ್‌ಗೆ ಆರೋಪಿತ ಅಧಿಕಾರಿಯು ನಿಗಧಿತ ವೇಳೆಯಲ್ಲಿ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸದಿದ್ದ ಕಾರಣ ಆರೋಪಿತ ಅಧಿಕಾರಿಯು ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ, ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು, ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 239/1, ನಾಗಶ್ರೀ ನಿಲಯ, 4ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿ 1957 ನಿಯಮ 11 (5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪುಟ್ಟಸ್ವಾಮಿ, ವ್ಯವಸ್ಥಾಪಕರು, ಜಿಲ್ಲಾ ಪಂಚಾಯತ್ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ಮೇಲೆ ಓದಲಾದ (4)ರಲ್ಲಿ ವಿಚಾರಣಾಧಿಕಾರಿಗಳು ನಿಯಮಾವಳಿಗಳ ಪ್ರಕಾರ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪ (1) ದಿನಾಂಕ 18–3–2000 ದಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿ ದುರ್ನಡತೆ ಎಸಗಿರುತ್ತಾರೆ (2) ಅನಧಿಕೃತ ಗೈರು ಹಾಜರಾದಾಗ ಹುದ್ದೆಯ ಪ್ರಭಾರವನ್ನು ಬೇರೆ ಯಾರಿಗೂ ವಹಿಸಿಕೊಡದೇ ಇರುವ ದುರ್ನಡತೆ ಎಸಗಿರುತ್ತಾರೆ (3) ಅನಧಿಕೃತ ಗೈರು ಹಾಜರಾದಾಗ ಕಛೇರಿಯ ವಶದಲ್ಲಿದ್ದ ಸರ್ಕಾರದ ಹಣ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ದುರುಪಯೋಗಪಡಿಸಿಕೊಂಡಿರುವುದು ವಿಚಾರಣಾ ವರದಿಯಲ್ಲಿ ಸಾಬೀತಾಗಿರುತ್ತದೆ. ಆರೋಪಿತ ಅಧಿಕಾರಿಯಿಂದ ಸರ್ಕಾರದ ಹಣ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ಗಳನ್ನು ಬಡ್ಡಿ ಸಮೇತ ವಸೂಲಿ ಮಾಡಲು ವಿಚಾರಣಾಧಿಕಾರಿಗಳು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (4)ರಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಎಸಗಿರುವ ಆರೋಪಗಳು ಸಾಬೀತಾಗಿರುವುದರಿಂದ ಮೇಲೆ ಓದಲಾದ (5)ರಲ್ಲಿ ಆರೋಪಗಳಿಗೆ ಸಂಬಂಧಿಸಿದಂತೆ, ಪ್ರತಿಯೊಂದು ಆರೋಪದ ಬಗ್ಗೆಯೂ ತಮ್ಮ ರಕ್ಷಣಾ ಹೇಳಿಕೆಯನ್ನು ಲಿಖಿತ ರೂಪದಲ್ಲಿ ಸರ್ಕಾರಕ್ಕೆ 15 ದಿನಗಳೊಳಗಾಗಿ ಸಲ್ಲಿಸುವಂತೆ ಎರಡನೇ ಕಾರಣ ಕೇಳುವ ನೋಟೀಸ್‌ನಲ್ಲಿ ಕೋರಲಾಗಿತ್ತು. ತಪ್ಪಿದ್ದಲ್ಲಿ, ಈ ಬಗ್ಗೆ ನೀಡಬಹುದಾದ ಹೇಳಿಕೆ, ಸಲ್ಲಿಸಬಹುದಾದ ದಾಖಲೆ, ಇತ್ಯಾದಿಗಳು ಇರುವುದಿಲ್ಲವೆಂದು ಭಾವಿಸಿ, ಸದರಿ ಅಧಿಕಾರಿಯ ವಿರುದ್ಧ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿ 1957 ನಿಯಮ 11 ರಡಿಯಲ್ಲಿ ದಂಡನೆ ವಿಧಿಸಲು ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಸದರಿ ನೋಟೀಸ್‌ಗೆ ಆರೋಪಿತ ಅಧಿಕಾರಿಯು ಇದುವರೆವಿಗೂ ಯಾವುದೇ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ.

ಶ್ರೀ ಜೆ.ಬಿ. ಕುಮಾರಸ್ವಾಮಿ, ಹಾಲಿ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, ಇವರು (ಹಿಂದಿನ ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ಕೈಮಗ್ಗ ಮತ್ತು ಜವಳಿ ಇಲಾಖೆ, ಚಿಕ್ಕಮಗಳೂರು) ದಿ: 6–5–1994ರಂದು ಸರ್ಕಾರಿ ಸೇವೆಗೆ ಸೇರಿದ್ದು, ಇವರ ಅರ್ಹತಾ ಪೂರ್ವ ಸೇವಾವಧಿಯು ಘೋಷಿತವಾಗಿರುವುದಿಲ್ಲ. ಈ ಅಧಿಕಾರಿಯು ಇವರ ಅರ್ಹತಾ ಪೂರ್ವ ಸೇವಾವಧಿ ಪೂರ್ಣಗೊಂಡಿರದೇ ಇದ್ದರೂ ಸಹ ಈ ಅವಧಿಯಲ್ಲಿಯೇ ಇವರು ಸರ್ಕಾರಿ ಕರ್ತವ್ಯಕ್ಕೆ ಗೈರು ಹಾಜರಾಗಿ ಸರ್ಕಾರದ ಹಣ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ)ಗಳನ್ನು ದುರುಪಯೋಗ ಪಡಿಸಿಕೊಂಡಿರುವುದು ಇಲಾಖಾ ವಿಚಾರಣೆಯಲ್ಲಿ ದೃಢಪಟ್ಟಿದ್ದು, ಈ ಅಧಿಕಾರಿಯ ನಡತೆಯು ಸರ್ಕಾರಿ ನೌಕರರಿಗೆ ಸಲ್ಲದ ವರ್ತನೆಯಾಗಿರುವುದರಿಂದ ಹಾಗೂ ಸದರಿಯವರು ಇನ್ನೂ ಅರ್ಹತಾ ಪೂರ್ವ ಸೇವಾವಧಿಯಲ್ಲಿಯೇ ಇರುವ ಕಾರಣ ಇವರನ್ನು ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲು ಸರ್ಕಾರವು ತೀರ್ಮಾನಿಸಿದ್ದು, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 264 ಕೈಸೇವಿ 2005, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜೆ.ಬಿ. ಕುಮಾರಸ್ವಾಮಿ, ಹಾಲಿ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ (ಹಿಂದಿನ ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ಕೈಮಗ್ಗ ಮತ್ತು ಜವಳಿ ಇಲಾಖೆ, ಚಿಕ್ಕಮಗಳೂರು) ಇವರು ಅರ್ಹತಾ ಪೂರ್ವ ಸೇವಾವಧಿಯಲ್ಲಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ದುರ್ನಡತೆ/ಕರ್ತವ್ಯ ಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವೆಗಳು (ಪ್ರೊಬೇಷನ್) ನಿಯಮಗಳು 1977ರ ನಿಯಮ 7ರ ಅನುಸಾರ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಿಮುಕ್ತಿಗೊಳಿಸಿದೆ ಹಾಗೂ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ಗಳನ್ನು ಭೂಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಹಾಗೂ ಅಧಿಕಾರಿಯ ವಿರುದ್ಧ ಸಿವಿಲ್ ಮೊಕದ್ದಮೆ ಹೂಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1175

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕನ್ನಡ ಚಲನಚಿತ್ರ ಅಕಾಡೆಮಿಯನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಐಟಿವೈ 58 ಪಿಐಎಫ್ 96, ದಿನಾಂಕ 26–7–1996.
2. ದಿನಾಂಕ 17–7–2008ರಂದು ವಿಧಾನ ಮಂಡಲದಲ್ಲಿ ಮಂಡಿಸಲಾದ ಆಯವ್ಯಯ 2008–09.
3. ವಾರ್ತಾ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ವಾಇ/ಚಚಿವಿ/ 2008–09/1098, ದಿನಾಂಕ 26–8–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 22–7–1996ರ ಸರ್ಕಾರಿ ಆದೇಶದಲ್ಲಿ ಕನ್ನಡ ಚಲನಚಿತ್ರ ಉದ್ಯಮವನ್ನು ಅಭಿವೃದ್ಧಿಪಡಿಸುವ ಬಗ್ಗೆ ಕನ್ನಡ ಚಲನಚಿತ್ರ ಅಕಾಡೆಮಿಯನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿತ್ತು. ಸದರಿ ಆದೇಶದಲ್ಲಿ

ಅಕಾಡೆಮಿಯಲ್ಲಿ ಇರಬಹುದಾದ ಸದಸ್ಯರುಗಳ ವಿವರಗಳನ್ನು ಹಾಗೂ ಚಲನಚಿತ್ರ ಅಕಾಡೆಮಿ ನಿರ್ವಹಿಸಬಹುದಾದ ಪ್ರಮುಖ ಕರ್ತವ್ಯಗಳನ್ನು ಸಹ ನಮೂದಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 17–7–2008ರಂದು ರಾಜ್ಯ ವಿಧಾನ ಮಂಡಲದಲ್ಲಿ ಮಂಡಿಸಲಾದ ಆಯವ್ಯಯ 2008–09ರಲ್ಲಿ ಕನ್ನಡ ಚಲನಚಿತ್ರ ಉದ್ಯಮದ ಬಹಳ ದಿನಗಳ ಬೇಡಿಕೆಯಾದ "ಕನ್ನಡ ಚಲನಚಿತ್ರ ಅಕಾಡೆಮಿ"ಯನ್ನು ಸ್ಥಾಪಿಸಲಾಗುವುದೆಂದು ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ್ದರು.

ಮೇಲೆ (3)ರಲ್ಲಿ ಓದಲಾದ ದಿನಾಂಕ 26–8–2008ರ ಪತ್ರದಲ್ಲಿ ವಾರ್ತಾ ಇಲಾಖಾ ನಿರ್ದೇಶಕರು ರಾಜ್ಯದಲ್ಲಿ "ಚಲನಚಿತ್ರ ಅಕಾಡೆಮಿ"ಯನ್ನು ರಚಿಸಿ ಸರ್ಕಾರ ದಿನಾಂಕ 22–7–1996ರನ್ವಯ ಆದೇಶ ಹೊರಡಿಸಿರುತ್ತದೆ. ಈ ಆದೇಶದಲ್ಲಿ ಅಕಾಡೆಮಿಯ ಸ್ವರೂಪ, ಸದಸ್ಯರ ಸಂಖ್ಯೆ: ಕಾರ್ಯ ಚಟುವಟಿಕೆಗಳ ವಿವರಗಳ ಬಗ್ಗೆ ಸ್ಥೂಲವಾಗಿ ಹೇಳಲಾಗಿರುತ್ತದೆ. ಇವುಗಳಲ್ಲಿ ಕೆಲವು ಅಂಶಗಳನ್ನು ಈಗಿನ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಪರಿಷ್ಕರಿಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾಪಿಸಿದ್ದಾರೆ.

1. ಈ ಹಿಂದೆ ದಿನಾಂಕ 22–7–1996ರ ಸರ್ಕಾರಿ ಆದೇಶದಲ್ಲಿನ ಕ್ರಮ ಸಂಖ್ಯೆ 3ರಲ್ಲಿರುವ ವಿಷಯವನ್ನು ಪರಿಷ್ಕೃತಗೊಳಿಸಿ, ಅಧ್ಯಕ್ಷರು, ಕನ್ನಡ ಚಲನಚಿತ್ರ ವಾಣಿಜ್ಯ ಮಂಡಳಿ ಅಥವಾ ಅವರ ಪ್ರತಿನಿಧಿ ಎಂದು ಸೇರಿಸುವ ಬಗ್ಗೆ.
2. ಕರ್ನಾಟಕ ಟೆಲಿವಿಷನ್ ಅಸೋಸಿಯೇಷನ್ ಅಧ್ಯಕ್ಷರು ಅಥವಾ ಅವರ ಪ್ರತಿನಿಧಿಯನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳುವ ಬಗ್ಗೆ.

ಮೇಲೆ ಹೇಳಿರುವ ಹಿನ್ನೆಲೆಯಲ್ಲಿ ಈ ವಿಷಯವನ್ನು ಪುನರ್ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 26 ಪಿಐಪಿ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008**.

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕನ್ನಡ ಚಲನಚಿತ್ರ ಉದ್ಯಮವನ್ನು ಅಭಿವೃದ್ಧಿ ಪಡಿಸುವ ಬಗ್ಗೆ ಕನ್ನಡ ಚಲನಚಿತ್ರ ಅಕಾಡೆಮಿಯನ್ನು ಸ್ಥಾಪಿಸಲು ಮಂಜೂರಾತಿ ನೀಡಿದೆ. ಈ ಅಕಾಡೆಮಿಯಲ್ಲಿ ಒಟ್ಟು 15 ಮಂದಿ ಈ ಕೆಳಗಿನಂತೆ ಸದಸ್ಯರಿರುತ್ತಾರೆ.

1. ಅಧ್ಯಕ್ಷರು – ಕನ್ನಡ ಚಲನಚಿತ್ರ ರಂಗದ ವಿವಿಧ ಪ್ರಕಾರಗಳಲ್ಲಿ ಅಪಾರ ಸೇವೆ ಸಲ್ಲಿಸಿದ, ಸಮಾಜ ಸೇವೆ, ಶಿಕ್ಷಣ ಕ್ಷೇತ್ರ ಮತ್ತು ಪತ್ರಿಕೋದ್ಯಮ ರಂಗದಲ್ಲಿ ಅಪಾರ ಸೇವೆ ಸಲ್ಲಿಸಿರುವ ವ್ಯಕ್ತಿಯನ್ನು ನೇಮಿಸಬಹುದಾಗಿದೆ.
2. ಸರ್ಕಾರದಿಂದ ನೇಮಕವಾದ ಸದಸ್ಯರು –7 ಮಂದಿ (ಚಲನಚಿತ್ರ ರಂಗದ ವಿವಿಧ ಪ್ರಕಾರಗಳು, ಸಮಾಜ ಸೇವೆ, ಶಿಕ್ಷಣ ಕ್ಷೇತ್ರ ಪತ್ರಿಕೋದ್ಯಮ ಚಲನಚಿತ್ರ ವಿಮರ್ಶನದಲ್ಲಿ ಹಾಗೂ ಸಮಾಜದ ಇನ್ನಿತರ ಪ್ರಮುಖ ರಂಗಗಳಲ್ಲಿ ಅಪಾರ ಸೇವೆ ಸಲ್ಲಿಸಿದವರನ್ನು ಆಯ್ಕೆ ಮಾಡಬೇಕು. ಇವರಲ್ಲಿ ಕನಿಷ್ಠ ಇಬ್ಬರು ಮಹಿಳಾ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕು.)
3. ಅಧ್ಯಕ್ಷರು, ಕನ್ನಡ ಚಲನಚಿತ್ರ ವಾಣಿಜ್ಯ ಮಂಡಳಿ ಅಥವಾ ಅವರ ಪ್ರತಿನಿಧಿ.
4. ಕನ್ನಡ ಚಲನಚಿತ್ರ ನಿರ್ಮಾಪಕರ ಸಂಘದ ಒಬ್ಬ ಪ್ರತಿನಿಧಿ.
5. ಕನ್ನಡ ಚಲನಚಿತ್ರ ನಿರ್ದೇಶಕರ ಸಂಘದ ಒಬ್ಬ ಪ್ರತಿನಿಧಿ.
6. ಚಲನಚಿತ್ರ ಕಲಾವಿದರು ಹಾಗೂ ಚಲನಚಿತ್ರ ಕಾರ್ಮಿಕ ಒಕ್ಕೂಟದ ಒಬ್ಬ ಪ್ರತಿನಿಧಿ.
7. ರಾಜ್ಯದಲ್ಲಿರುವ ವಿವಿಧ ಚಲನಚಿತ್ರ ಸೊಸೈಟಿಗಳ ಓರ್ವ ಪ್ರತಿನಿಧಿ (ಸರ್ಕಾರದಿಂದ ನೇಮಕವಾಗಬೇಕು).
8. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು.
9. ಕರ್ನಾಟಕ ಟೆಲಿವಿಷನ್ ಅಸೋಸಿಯೇಷನ್ ಅಧ್ಯಕ್ಷರು ಅಥವಾ ಅವರ ಪ್ರತಿನಿಧಿ.

ವಾರ್ತಾ ಮತ್ತು ಪ್ರಚಾರ ಇಲಾಖೆಯ ಒಬ್ಬ ಅಧಿಕಾರಿಯನ್ನು ಅಕಾಡೆಮಿಯ ರಿಜಿಸ್ಟ್ರಾರ್ ಆಗಿ ನೇಮಿಸಲಾಗಿದೆ.

ಚಲನಚಿತ್ರ ಅಕಾಡೆಮಿಯು ಈ ಕೆಳಗಿನಂತೆ ಪ್ರಮುಖ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು:

1. ರಾಜ್ಯ ಸರ್ಕಾರವು ಮಂಜೂರು ಮಾಡುವ ಈ ಕೆಳಗಿನ ಪ್ರಶಸ್ತಿಗಳನ್ನು ಮಂಜೂರು ಮಾಡುವಲ್ಲಿ ಅಕಾಡೆಮಿಯು ಸರ್ಕಾರಕ್ಕೆ ಸೂಕ್ತ ಶಿಫಾರಸ್ಸು ಮಾಡಬೇಕು.

   ಅ. ಕರ್ನಾಟಕ ಚಲನಚಿತ್ರ ರಾಜ್ಯ ಪ್ರಶಸ್ತಿಗಳು.

ಆ. ಡಾ: ರಾಜ್‌ಕುಮಾರ್ ಪ್ರಶಸ್ತಿ

ಇ. ಪುಟ್ಟಣ್ಣ ಕಣಗಾಲ್ ಪ್ರಶಸ್ತಿ

2. 1996–97ರ ಸಾಲಿನಲ್ಲಿ ಹಾಗೂ ತದನಂತರ ಸೆನ್ಸಾರ್ ಆದ ಹಾಗೂ ಆಗುವ ಕನ್ನಡ ಹಾಗೂ ಇತರೆ ಪ್ರಾದೇಶಿಕ ಚಲನಚಿತ್ರಗಳಿಗೆ ಸಹಾಯಧನ ಮಂಜೂರು ಮಾಡಲು ಅವುಗಳ ಗುಣಮಟ್ಟವನ್ನು ಹಾಗೂ ಇತರ ವಿಷಯಗಳನ್ನು ಪರಿಶೀಲಿಸಿ ಅವು ಸಹಾಯಧನ ಪಡೆಯಲು ಅರ್ಹ ಇದೆಯೇ ಎಂಬ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು.
3. ರಾಜ್ಯದಲ್ಲಿ ಚಲನಚಿತ್ರ ಸೊಸೈಟಿಗಳ ಅಭಿವೃದ್ಧಿಗಾಗಿ ಅವಶ್ಯವಿರುವ ಕ್ರಮ ಕೈಗೊಳ್ಳುವುದು.
4. ಚಲನಚಿತ್ರ ರಂಗದ ವಿವಿಧ ಪ್ರಕಾರಗಳಲ್ಲಿ ಅವಶ್ಯವಿರುವ ತರಬೇತಿ ಏರ್ಪಡಿಸುವುದು ಹಾಗೂ ಇತ್ತೀಚಿನ ತಾಂತ್ರಿಕ ಹಾಗೂ ಇತರ ಬೆಳವಣಿಗೆಗಳನ್ನು ಗಮನದಲ್ಲಿರಿಸಿ ಕನ್ನಡ ಚಲನಚಿತ್ರ ರಂಗವು ಈ ನಿಟ್ಟಿನಲ್ಲಿ ಅವಶ್ಯಕತೆಗೆ ತಕ್ಕಂತೆ ಅಭಿವೃದ್ಧಿಗೊಳ್ಳುವಲ್ಲಿ ಅವಶ್ಯವಿರುವ ಕ್ರಮ ಕೈಗೊಳ್ಳುವುದು.
5. ಕನ್ನಡ ಚಲನಚಿತ್ರ ರಂಗದಲ್ಲಿ ಅಶ್ಲೀಲತೆ ಮತ್ತು ಹಿಂಸೆಯನ್ನು ಕಡಿಮೆ ಮಾಡಿ ಕುಟುಂಬ ವರ್ಗದವರು ಒಟ್ಟಿಗೆ ಚಲನಚಿತ್ರವನ್ನು ವೀಕ್ಷಿಸಲು ಸಹಕಾರಿಯಾಗುವಂತೆ ಕನ್ನಡ ಚಲನಚಿತ್ರಗಳ ಗುಣಮಟ್ಟವನ್ನು ಉತ್ತಮಗೊಳಿಸಲು ಅವಶ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳುವುದು.
6. ಸರ್ಕಾರದಿಂದ ಆಗಿಂದಾಗ್ಗೆ ನಿಧಿಷ್ಟವಾಗಿ ಸೂಚಿಸಲಾದ ಕಾರ್ಯವನ್ನು ಕೈಗೊಳ್ಳಲು ಅವಶ್ಯವಿರುವ ಕ್ರಮ ಕೈಗೊಳ್ಳುವುದು.

ಅಕಾಡೆಮಿಯು ದೈನಂದಿನ ವ್ಯವಹಾರ ಇತ್ಯಾದಿ ಬಗ್ಗೆ ಅವಶ್ಯವಿರುವ ವಿಧಿ ವಿಧಾನಗಳ : ನಿಯಮಾವಳಿಗಳ ಬಗ್ಗೆ ಅಕಾಡೆಮಿ ಪ್ರಸ್ತಾವನೆಯನ್ನು ಸಲ್ಲಿಸಬಹುದು.

ಅಕಾಡೆಮಿಗೆ ಸರ್ಕಾರದಿಂದ ನೀಡುವ ಅನುದಾನದ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ದಿನಾಂಕ 22–7–1996ರ ಆದೇಶ ಸಂಖ್ಯೆ: ಐಟಿವೈ 58 ಪಿಐಎಫ್ 96ರ ಆದೇಶವನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1280

**ಎಸ್. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಆರ್. ಮಲ್ಲಿಕಾರ್ಜುನ್, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು ಜಿಲ್ಲೆ ಇವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಇಲಾಖೆ ವಿಚಾರಣೆ–ಅಂತಿ ಆದೇಶ.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ನೋಟೀಸ್ ಸಂಖ್ಯೆ: ಡಿಪಿಜಿ/ಬೆಂವಿ–2/ತು/1/06–07, ದಿನಾಂಕ 12–9–2006.
2. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಪಿಜಿ/ಬೆಂವಿ–2/ತು/1/06–07, ದಿನಾಂಕ 2–5–2007.
3. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/1/2007–08, ದಿನಾಂಕ 14–12–2007.
4. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ/ಬೆಂವಿ–2/ತು/1/06–07, ದಿನಾಂಕ 8–1–2008.
5. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆಂವಿ–2/ತು/1/06–07, ದಿನಾಂಕ 28–3–2008.

**ಪ್ರಸ್ತಾವನೆ :**

ಡಾ: ಆರ್. ಮಲ್ಲಿಕಾರ್ಜುನ್, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು ಜಿಲ್ಲೆ ಇವರು ದಿನಾಂಕ 4–5–2006 ರಿಂದ ಯಾವುದೇ ರಜೆ ಅರ್ಜಿಗಳನ್ನು ಸಲ್ಲಿಸದೆ ಅಥವಾ ಪೂರ್ವಾನುಮತಿ ಪಡೆಯದೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದರಿಂದ, ಕರ್ತವ್ಯಕ್ಕೆ ಹಿಂದಿರುಗುವಂತೆ ನೋಟೀಸ್ ನೀಡಲಾಗಿದ್ದರೂ ಸಹ ಯಾವುದೇ ಪ್ರತ್ಯುತ್ತರವನ್ನು ನೀಡದೆ ಸೇವೆಯಿಂದ ಉಳಿದುಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ, ಸದರಿ ವೈದ್ಯರಿಗೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆಪಾದಿತರಿಗೆ ಜಾರಿ ಮಾಡಿ, ಅವರಿಂದ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಡಾ: ಮಲ್ಲಿಕಾರ್ಜುನ್ ರವರು ಆಯುಕ್ತರ ನೋಟೀಸಿಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ ಇವರ ವಿರುದ್ಧದ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಲು ಆಯುಕ್ತರು ನಿರ್ಧರಿಸಿ, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ಪ್ರಕರಣಕ್ಕೆ ಸಂಬಂಧಿಸಿದಂತೆ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (3)ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರಿಗೆ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಡಾ: ಮಲ್ಲಿಕಾರ್ಜುನ್, ಮಕ್ಕಳ ತಜ್ಞರು ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಸಂಪೂರ್ಣವಾಗಿ ಸಾಬೀತಾಗಿದೆ ಎಂದು ನಿರ್ಣಯ ನೀಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ವಿಚಾರಣಾ ವರದಿಯನ್ನು ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ಆರೋಪಿತ ವೈದ್ಯರಿಗೆ ಜಾರಿ ಮಾಡಿ, ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಸಲ್ಲಿಸುವಂತೆ ಸೂಚಿಸಿರುತ್ತಾರೆ. ಆದರೆ ಸದರಿ ಆರೋಪಿತ ವೈದ್ಯಾಧಿಕಾರಿಯು ಈ ತಿಳುವಳಿಕೆ ಪತ್ರವನ್ನು ದಿನಾಂಕ 30–1–2008ರಂದು ಸ್ವೀಕರಿಸಿ, ನಿಗದಿತ ಅವಧಿಯಲ್ಲಿ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಡಾ: ಮಲ್ಲಿಕಾರ್ಜುನ್, ಮಕ್ಕಳ ತಜ್ಞರು ಇವರು ದಿನಾಂಕ 4–5–2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ವಿಚಾರಣೆಯಿಂದ ಸಾಬೀತಾಗಿರುವುದರಿಂದ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸದರಿ ಅಧಿಕಾರಿಯವರ ವಿರುದ್ಧದ ಆರೋಪಕ್ಕೆ ಸಂಬಂಧಿಸಿದಂತೆ, ದೋಷಾರೋಪಣಾ ಪಟ್ಟಿಗೆ ಮರು ಕರೆ ನೋಟೀಸಿಗೆ ಹಾಗೂ ವಿಚಾರಣಾ ವರದಿಯ ಅಂಶಗಳಿಗೆ ಪ್ರತ್ಯುತ್ತರ ನೀಡದೆ ಇರುವುದರಿಂದ ಹಾಗೂ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ನೇಮಕ ಹೊಂದಿದ್ದು ನೇಮಕ ಹೊಂದಿದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವಲ್ಲಿ ಅಸಮರ್ಥರಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳ ನಿಯಮ 1977ರ ಉಪ ನಿಯಮ–6ರ ಮೇರೆಗೆ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ದಾಖಲೆಗಳು, ಸಾಕ್ಷಿಗಳ ಹೇಳಿಕೆಗಳು ಹಾಗೂ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಡಾ: ಮಲ್ಲಿಕಾರ್ಜುನ್, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು ಜಿಲ್ಲೆ ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು, ಕಾರಣ ನೀಡದೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಹಾಗೂ ಕರ್ತವ್ಯಕ್ಕೆ ಹಾಜರಾಗುವಂತೆ ಕರೆ ನೋಟೀಸ್ ನೀಡಿದಾಗಲೂ ಅದಕ್ಕೆ ಸ್ಪಂದಿಸದೆ, ಸರ್ಕಾರಿ ಸೇವೆಗೆ ದೀರ್ಘಾವಧಿಯ ಕಾಲ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಇವರ ಸೇವಾ ವಿವರವನ್ನು ಪರಿಶೀಲಿಸಲಾಗಿದ್ದು, ಸದರಿ ಅಧಿಕಾರಿಯ ಖಾಯಂಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಇವರು ಖಾಯಂ ಪೂರ್ವ ಸೇವಾವಧಿಯಲ್ಲಿ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳ ನಿಯಮ 1977ರ ಉಪ ನಿಯಮ–6ರ ಮೇರೆಗೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 208 ಎಂಎಸ್ಎ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಮಲ್ಲಿಕಾರ್ಜುನ್, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ), ನಿಯಮಾವಳಿಗಳು 1977ರ, ನಿಯಮ–6ರ ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1700

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಬೆಂಗಳೂರಿನ ಶ್ರೀ ಕಂಠೀರವ ಸ್ಟುಡಿಯೋ ನಿಯಮಿತಕ್ಕೆ ಸೇರಿದ 2.5 (ಎರಡೂವರೆ ಎಕರೆ) ಜಮೀನನ್ನು ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ)ಕ್ಕೆ ಹಸ್ತಾಂತರಿಸುವ ಬಗ್ಗೆ ಹಾಗೂ ಡಾ: ರಾಜ್‌ಕುಮಾರ್ ರವರ ಸ್ಮಾರಕ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 7 ಪಿಐಎಫ್ 2007, ದಿನಾಂಕ 11–1–2007.
2. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 7 ಪಿಐಎಫ್ 2007, ದಿನಾಂಕ 29–8–2007.
3. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 7 ಪಿಐಎಫ್ 2007, ದಿನಾಂಕ 18–12–2007.
4. ಸದಸ್ಯ ಕಾರ್ಯದರ್ಶಿ ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ), ಬೆಂಗಳೂರುರವರ ಪತ್ರ ಸಂಖ್ಯೆ: ಡಾ: ರಾಜ್:ಪ್ರ(ರಿ) 2007–08, ದಿನಾಂಕ 24–12–2007.
5. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 7 ಪಿಐಎಫ್ 2007, ದಿನಾಂಕ 17–1–2008.
6. ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಸನಿ: 13: ಹೊಯೋ:2007–08, ದಿನಾಂಕ 30–8–2008.

**ಪ್ರಸ್ತಾವನೆ :**

ಕನ್ನಡದ ವರನಟ ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ಪುರಸ್ಕೃತರಾದ ದಿ: ಡಾ: ರಾಜ್‌ಕುಮಾರ್‌ರವರ ಗೌರವಾರ್ಥವಾಗಿ ಬೆಂಗಳೂರಿನಲ್ಲಿ ಒಂದು ಸ್ಮಾರಕ ಕೇಂದ್ರವನ್ನು ಸ್ಥಾಪಿಸಲು ಸದರಿ ಸ್ಮಾರಕ ಕೇಂದ್ರವನ್ನು ಸ್ಥಾಪಿಸಬೇಕಾದ ಸ್ಥಳ ಹಾಗೂ ಅದರ ರೂಪುರೇಷೆಗಳ ಬಗ್ಗೆ ಪರಿಶೀಲಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸಮಿತಿಯನ್ನು ರಚಿಸಲಾಗಿದೆ. ಕ್ರಮ ಸಂಖ್ಯೆ (2), (3) ಮತ್ತು (5)ರಲ್ಲಿ ಓದಲಾದ ಆದೇಶದಲ್ಲಿ ದಿವಂಗತ ಡಾ: ರಾಜ್‌ಕುಮಾರ್ ಸ್ಮಾರಕ ನಿರ್ಮಾಣಕ್ಕಾಗಿ ಕ್ರಮವಾಗಿ ಮೊದಲನೆ ಕಂತಿನ ಅನುದಾನ ರೂ. 100.00 ಲಕ್ಷ, ಎರಡನೆ ಕಂತಿನ ಅನುದಾನ ರೂ. 100.00 ಲಕ್ಷ ಹಾಗೂ ಮೂರನೇ ಕಂತಿನ ಅನುದಾನವಾಗಿ ರೂ. 100.00 ಲಕ್ಷ ಒಟ್ಟಾರೆ ರೂ. 300.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಕ್ರಮಸಂಖ್ಯೆ (4)ರಲ್ಲಿ ಓದಲಾದ ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ), ಬೆಂಗಳೂರು ಇದರ ಸದಸ್ಯ ಕಾರ್ಯದರ್ಶಿ ಇವರ ಪತ್ರದಲ್ಲಿ ದಿನಾಂಕ 18–4–2007ರಂದು ನಡೆದ ಸಮಿತಿ ಸಭೆಯಲ್ಲಿ ಡಾ: ರಾಜ್‌ಕುಮಾರ್ ಸ್ಮಾರಕ ಕಟ್ಟಡ ನಿರ್ಮಾಣ ಹಾಗೂ ಉದ್ಯಾನವನಕ್ಕೆ ಅಗತ್ಯವಿರುವ ಅಂದಾಜು ಎರಡೂವರೆ ಎಕರೆ ಜಮೀನನ್ನು ಶ್ರೀ ಕಂಠೀರವ ಸ್ಟುಡಿಯೋರವರಿಂದ ಪಡೆಯಲು ತೀರ್ಮಾನಿಸಲಾಗಿದೆ ಎಂದು ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ) ಸದಸ್ಯ ಕಾರ್ಯದರ್ಶಿಗಳು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಮೇಲೆ ಕ್ರಮಸಂಖ್ಯೆ (6)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರು ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ) ಬೆಂಗಳೂರು ಇವರು ಡಾ: ರಾಜ್‌ಕುಮಾರ್ ಸ್ಮಾರಕವನ್ನು ಕಂಠೀರವ ಸ್ಟುಡಿಯೋದ ಆವರಣದಲ್ಲಿ ನಿರ್ಮಿಸುತ್ತಾರೆಂದು ತಿಳಿಸಿ, ನೀಲಿ ನಕಾಶೆ ಹಾಗೂ ಅಂದಾಜು ಪಟ್ಟಿಯನ್ನು ಸಲ್ಲಿಸಿದ್ದು, 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಡಾ: ರಾಜ್‌ಕುಮಾರ್ ಸ್ಮಾರಕ ನಿರ್ಮಿಸಲು ಮಾನ್ಯ ಮುಖ್ಯಮಂತ್ರಿಗಳು

ಘೋಷಿಸಿರುವ ರೂ. 5.00 ಕೋಟಿಗಳನ್ನು ಲೆಕ್ಕಶೀರ್ಷಿಕೆ 2205–00–102–5–09–101 (ಯೋಜನೆ)ಗೆ ಹೆಚ್ಚುವರಿಯಾಗಿ ಡಾ: ರಾಜ್‌ಕುಮಾರ್ ಪ್ರತಿಷ್ಠಾನ (ರಿ) ಬೆಂಗಳೂರು ರವರಿಗೆ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 115 ಪಿಐಎಫ್ 2007, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡದ ವರನಟ ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ಪುರಸ್ಕೃತರಾದ ದಿ: ಡಾ:ರಾಜ್‌ಕುಮಾರ್ ಇವರ ಗೌರವಾರ್ಥ ಸ್ಮಾರಕವನ್ನು ನಿರ್ಮಿಸಲು ರಚಿತವಾಗಿರುವ ಡಾ: ರಾಜ್‌ಕುಮಾರ್ ಪ್ರತಿಷ್ಠಾನ ಬೆಂಗಳೂರು (ರಿ) ಇದಕ್ಕೆ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 2220–01–800–0–14–100 (ಯೋಜನೆ)ಅಡಿ ಒದಗಿಸಿರುವ ರೂ. 5.00 ಕೋಟಿಗಳಲ್ಲಿ ರೂ. 1.00 ಕೋಟಿ (ಒಂದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:1361: ವೆಚ್ಚ–5/2008, ದಿನಾಂಕ 8–9–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1281

**ಎಸ್. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## PERSONNEL AND ADMINISTRATIVE REFORMS SECRETARIAT

**No. DPAR 327 SAS 2008, Bangalore Dated 12th August 2008.**

**CORRIGENDUM**

In the Government Notification of even number dated 8th July 2008;

i) In the para 8 relating to the posting of Sri Jannu Arvind Ramachandra, IAS, the words – "Commerce and Industries Department" occurring in 2nd line shall be read as "Information Technology, Bio-Technology and Science and Technology Department",

ii) In the para 16 relating to the posting of Sri P.C. Jaffer, IAS, the words – "Director, Plan Monitoring Unit and Director, NREGS" –occurring in 2nd line shall be read as "Director, Project Planning & Monitoring Unit and Director, NREGS and Ex-officio Deputy Secretary to Government".

By order and in the name of the Governor of Karnataka,

PR. 1224

**K.G. ANANTHA**

Under Secretary to Government,

DP & AR (Services-I).

## FINANCE SECRETARIAT

**Sub :** Implementation of the recommendation of the 5th State Pay Commission regarding assignment of higher pay scale to the posts of Primary School Teachers – Reg.

**Read :** Govt. Order No. FD 8 SRP 2007, dated 16-5-2007.

**Preamble:**

On the basis of the recommendation made by the 5th State Pay Commission, the scales of pay of the State Government employees were revised with effect from 1-7-2005 vide Government Order dated 16-5-2007 read above.

The 5th State Pay Commission in its Final Report (II Volume) has recommended assignment of new pay scale of Rs. 6800-13000 to the Primary School Teachers who are presently in the pay scale of

Rs. 6250-12000. The recommendation of the 5th State Pay Commission has been considered by the Government and the following orders are issued.

**Government Order No. FD 31 SRP 2007, Bangalore, Dated 28th August 2008**

In exercise of the powers conferred by sub-rule (2) of Rule 4 of the Karnataka Civil Services (Revised Pay) Rules, 2007, Government of Karnataka hereby order that the scale of pay applicable to the posts of Primary School Teachers shall be revised from Rs. 6250-125-6500-150-7100-175-7800-200-8600-225-9500-250-10500-300-12000 to Rs. 6800-150-7100-175-7800-200-8600-225-9500-250-10500-300-12300-350-13000.

2. The above revision of pay scale shall be effective from 1st August 2008.

3. The Pay of the Primary School Teachers shall be fixed in the revised pay scale in accordance with the provisions of Rule 43 of the KCSRs.

By order and in the name of the Governor of Karnataka,

PR. 1287

**SUNDARA RAJA GUPTHA**

Deputy Secretary to Government,

Finance Department. (Services-2)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಜೆ.ಎಂ. ಬದಾಮಿ, ಹೆಚ್.ಸಿ. –720, ತಾಳಿಕೋಟೆ ಪೊಲೀಸ್ ಠಾಣೆ, ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರ ಆದೇಶ ಸಂಖ್ಯೆ: ಸಿಬ್ಬಂದಿ:3: ಪಿಆರ್:06–05/ಓ.ಬಿ.ಸಂ: 143/06, ದಿನಾಂಕ 20–4–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/86/ಉವ/2006, ದಿನಾಂಕ 31–7–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 1–9–2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)115/2006–07, ದಿನಾಂಕ 24–1–2007 & 7–12–2007.

**ಪ್ರಸ್ತಾವನೆ :**

ಶ್ರೀ ಜೆ.ಎಂ. ಬದಾಮಿ, ಹೆಚ್.ಸಿ. –720, ತಾಳಿಕೋಟೆ ಪೊಲೀಸ್ ಠಾಣೆ, ಬಿಜಾಪುರ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಜೆ.ಎಂ. ಬದಾಮಿ, ಸಿ.ಪಿ.ಸಿ. –720, ತಾಳಿಕೋಟೆ ಪೊಲೀಸ್ ಠಾಣೆಯಲ್ಲಿ ನೀವು ಸಿ.ಹೆಚ್.ಸಿ. ಅಂತಾ ಜವಾಬ್ದಾರಿಯುತ ಹುದ್ದೆಯಲ್ಲಿ ಇರುತ್ತೀರಿ. ನೀವು ದಿ: 29–5–04 ರಿಂದ 27–6–04ರ ವರೆಗೆ ಒಟ್ಟು 30 ದಿವಸ ಪರಿವರ್ತಿತ ರಜೆ ಮಂಜೂರು ಪಡೆದುಕೊಂಡು ರಜೆಯ ಮೇಲೆ ಹೋಗಿ, ದಿ: 28–6–04 ಪರತ ಬಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ದಿ: 20–12–04 ರವರೆಗೆ ಸುಮಾರು 6 ತಿಂಗಳ ವರೆಗೆ ಗೈರುಹಾಜರಿ ಉಳಿದಿರುತ್ತೀರಿ. ನಿಮಗೆ ಪಲಾಯನ ನೋಟೀಸ್ ಹೊರಡಿಸಿದ ನಂತರ ದಿ: 20–12–04ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಮುಖ್ಯಪೇದೆಯಾಗಿ ಪರಿವರ್ತಿತ ರಜೆಯಲ್ಲಿ ಹೋಗಿ, ರಜೆಯಿಂದ ಪರತ ಬಂದು ಮೇಲಾಧಿಕಾರಿಗಳಿಗೆ ತಿಳಿಸದೇ ರಜೆಗಾಗಿ ಮನವಿ ಸಲ್ಲಿಸದೇ ಸುಮಾರು 6 ತಿಂಗಳ ದೀರ್ಘಾವಧಿವರೆಗೆ ಅನಧಿಕೃತವಾಗಿ ಕರ್ತವ್ಯದಿಂದ ಗೈರುಹಾಜರು

ಉಳಿದು ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿ ಹಾಗೂ ಬೇಜವಾಬ್ದಾರಿ ವರ್ತನೆ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 20–4–2006ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದವರೆಗೆ ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದೆ ಹಾಗೂ ಗೈರುಹಾಜರಾದ ಅವಧಿ ದಿ: 28–6–2004 ರಿಂದ 20–12–2004 ರವರೆಗಿನ ಅವಧಿಯನ್ನು ವೇತನ ರಹಿತರಜೆ ಎಂದು ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯನ್ನು ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 31–7–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಅನಧಿಕೃತ ಗೈರು ಹಾಜರಾಗಿರುವುದು ದಾಖಲೆಗಳಿಂದ ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಸಮರ್ಥನೆ ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 193 ಪೊಸಿಅ 2007, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಎಂ. ಬದಾಮಿ, ಹೆಚ್.ಸಿ. –720, ತಾಳಿಕೋಟೆ ಪೊಲೀಸ್ ಠಾಣೆ, ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1632

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## COMMERCE AND INDUSTRIES SECRETARIAT

**Sub:** Permission to M/s. Sagar Cements Ltd., Hyderabad, to establish an "5.5 MTPA Cement Plant with 60 MW Captive Thermal Generation" in Chatrasala Village, Chincholi Taluk, Gulbarga District – Reg.

**Ref:**
1) Proceedings of the 11th, 13th & 14th State High Level Clearance Committee (SHLCC) meeting held on 28.9.2007, 13.03.08 & 17.03.2008.
2) Ref.No.CCCL:ADMN:2008 dated 26th March 2008, Executive Director, Chettinad Cement Corporation Limited..
3) Ref.No.SCL:ADMN:2008 dated 26th March 2008, Executive Director, Sagar Cement Corporation Limited..

**Preamble:**

M/s. Sagar Cements Ltd., had proposed to establish "5.5 MTPA Cement Plant with 60 MW Captive Thermal Generation" with an investment of Rs.2400.00 crores in 1790 acres of land at various Sy. Nos. as per the list enclosed, of Chatrasala village, Chincholi Taluk, Gulbarga District. The proposed project would provide a direct employment to 450 persons. The Company had requested for approval of the project and sanction of various infrastructure facilities as well as incentives and concessions.

The SHLCC in its meetings had noted that M/s. Sagar Cements Ltd. and M/s. Chettinad Cement Corporation Ltd. two different companies had applied for a project at Kallur road village, Chincholi Taluk, Gulbarga District over the same land. SHLCC approved this project, subject to the condition that the issue at Kallur road village is sorted out mutually by both the companies.

Now, the concerned companies have confirmed an amicable solution for Kallur road village land, vide their letters read at (2) and (3) as advised by the SHLCC and hence, the following order.

**GOVERNMENT ORDER NO: CI 118 SPI 2008, BANGALORE DATED: 29th April 2008**

In the circumstances explained above, Government is pleased to approve the project proposal of M/s. Sagar Cement Ltd, Hyderabad, to establish a unit for manufacture of "5.5 MTPA Cement Plant with 60 MW Captive Thermal Generation" with an investment of Rs.2400.00 crores in 1790 acres of land at Chatrasala Village, Chincholi Taluk, Gulbarga District, and extend the following infrastructure facilities, incentives and concessions, subject to the following conditions.

**INFRASTRUCTURE FACILITIES:**

**Land:** The Revenue Department to permit the company to purchase 1790 acres of private land for the project u/s. 109 of KLR Act in various Sy. Nos. as per annexure to this order, of Chatrasala Village, Chincholi Taluk, Gulbarga District and conversion of the land for the same, thereafter.

**Power:** 50,000 KVA power to be serviced from GESCOM.

**Water:** 6.0 MLD to be met out from bore wells/own source. The company shall adopt rainwater harvesting and water recycling.

**Incentives and Concessions:** As per the New Industrial Policy 2006-11.

**Environment:** KSPCB to issue CFE as per its norms. The company shall obtain EC from MOEF, GOI. No civil works shall commence prior to obtaining EC.

**Employment:** Project proponents shall play a proactive role in enhancing the employability of the job seekers, including the land losers. Further, the project proponents shall provide employment for at least one member of the family of each land loser. The Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e., Dr. Sarojini Mahishi Report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development:** Whereever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Government.

**Others:**

1. The promoters shall take all statutory and other necessary clearances and plan approval from competent authorities and shall submit milestones/ progress in implementation of the project regularly, which will be monitored by the Departments concerned.
2. The project proponents shall implement rehabilitation and resettlement plan as per the National Rehabilitation and Resettlement Policy –2007, whenever applicable.
3. Wherever acquisition through Karnataka Industrial Area Development Board, (KIADB) is proposed, the project proponents shall provide employment for at least one member of the family of each land loser.
4. In projects which envisage a housing component, the promoters shall reserve 20% of residential built-up area of the project for economically weaker sections (LIG)
5. The project proponents shall provide a map indicating the road connectivity and a note on the anticipated circulation pattern, traffic management, etc. Karnataka Udyoga Mitra, (KUM) shall share this with the PWD and the Police Department. The project proponents shall agree to part with land free of cost for any road widening/traffic mitigation measures that may be suggested by Public Works Department (PWD)/Police Department.
6. In all cases where significant employment is to be created under the proposed project, Karnataka Udyoga Mitra, (KUM) shall forward the manpower needs to the Departments of Employment & Training and C & I and ensure that skill development programmes are taken up in the catchments area of the project. Project proponents shall also play a proactive role in enhancing the employability of the local job seekers, including the land losers.

This approval is valid for a period of two years from the date of issue.

By Order and in the name of the President of India,

**B.R. NAGABHUSHANA**

Desk Officer (Technical Cell)

Commerce & Industries Department

**Annexure to Government Order No. CI 118 SPI 2008, dt: 29th April 2008**

**Area applied by Sagar Cements Limited for Limestone Mining Lease over an extent of 1790 acres at Chatrasala Village, Chincholi Taluq, Gulbarga District.**

| Sl. No. | Survey No. | Extent | | | Name of Pattedar (Owner) |
|---|---|---|---|---|---|
| | | Acres | Guntas | | |
| 1 | 1 | 0 | 29 | | Khasimsab S/o Imam Sab |
| 2 | 2/1 | 0 | 33 | | Shri Siddarameshwar |
| | | 0 | 21 | 8 | Smt. Lalamma W/o Tuljappa R/o Chattarsal |
| | | 0 | 06 | 0 | Narayan Reddy S/o Bhim Reddy |
| 3 | 2/2 | 0 | 03 | 04 | Narasappa S/o Bichappa Kumbar |
| | | 0 | 01 | 04 | Syed Pasha S/o Syed Dulhe Sab R/o Chattarsal |
| | | 0 | 24 | | Smt. Lalamma W/o Tuljappa R/o Chattarsal |
| 4 | 2/3 | 0 | 05 | 12 | Erappa S/o Bassappa Kumbar R/o Chattarsal |
| | | 0 | 03 | 04 | Shamsuddin S/o Mahboobsab R/o Chattarsal |
| 5 | 2/4 | 0 | 33 | | Smt. Lalamma W/o Tuljappa, R/o Chattarsal |
| 6 | 2/5 | 0 | 33 | | Smt. Lalamma W/o Tuljappa R/o Chattarsal |
| 7 | 2/6 | 0 | 33 | | Smt. Lalamma W/o Tuljappa R/o Chattarsal |

| Sl. No. | Survey No. | Extent Acres | Extent Guntas | | Name of Pattedar (Owner) |
|---|---|---|---|---|---|
| 8 | 3 | 0 | 12 | | Ramrao S/o Mallanrao |
| 9 | 4 | 0 | 13 | | Annarao Patil, Rajendra Rao Patil, Ramrao Patil |
| 10 | 5/1 | 1 | 08 | | Laxmibai D/o Rachappa |
| 11 | 5/2 | 1 | 09 | | Ramchandra S/o Bogappa Badiger |
| 12 | 6 | 11 | 24 | | Annarao Patil, Rajendra Rao Patil, Chandrashekhar Patil |
| 13 | 7 | 6 | 04 | | Munisab S/o Khasimsab |
| 14 | 8 | 5 | 21 | | Mahmood Pasha S/o Hussain sab |
| | | 6 | 00 | | Mohammed Mastappa S/o Mohammed |
| | | 5 | 10 | | Rasoolbi W/o Mohammed Mastapa |
| | | 0 | 28 | | Ramreddy S/o Gundareddy R/o Chattarsal |
| | | 2 | 20 | | Mohammed Mustafa S/o Mohammed Abdul Gafoor sab R/o Chatrasala |
| 15 | 9 | 17 | 05 | | Sharadamma W/o Narayanreddy |
| | | 4 | 30 | | Rajshekar S/o Sangappa |
| 16 | 10 | 0 | 24 | | Sudarshanreddy S/o Baswantreddy |
| | | 1 | 02 | | Munikreddy S/o Baswantreddy |
| | | 4 | 29 | | Sangappa S/o Channappa |
| | | 3 | 27 | | Nagraj S/o Channappa |
| 17 | 11/1 | 2 | 27 | | Neelamma W/o Cashrath |
| | | 2 | 27 | | Prabhu Bassappa |
| | | 2 | 26 | | Gopal S/o Durgappa |
| | | 3 | 17 | | Shri Tuljappa S/o Shivappa R/o Burugpalli |
| 18 | 11/2 | 3 | 07 | | Amruthrao S/o Dhonderao |
| | | 2 | 26 | | Neelamma W/o Dashrath |
| | | 2 | 20 | | Prabhu Bassappa |
| | | 2 | 28 | | Gopal S/o Durgappa |
| 19 | 12 | 2 | 18 | | Mallappa Chandrappa |
| | | 2 | 08 | | Mallappa S/o Narasappa |
| | | 1 | 30 | | Mallappa S/o Narasappa Burugpalli |
| | | 1 | 19 | | Bhimshappa S/o Tammanna R/o Chattarsal |
| | | 0 | 30 | | Erappa S/o Bakkappa |
| | | 0 | 29 | | Siddappa S/o Bakkappa |
| 20 | 13 | 12 | 14 | | Sidramappa S/o Ravanappa |
| 21 | 14/1 | 3 | 14 | | Ramachandrappa S/o Ramappa |
| | | 3 | 14 | | Ghudusab S/o Hussain Sab |
| 22 | 14/2 | 2 | 38 | | Ghudusab S/o Hussain Sab |
| 23 | 15 | 7 | 25 | | Mohammedsab Muneer Sab Modinsab, Mogansab S/o Modinsab |
| | | 7 | 25 | | Ammersab Bau Miyan |
| 24 | 16/1 | 3 | 25 | | Basappa S/o Tippanna, Balappa S/o Tippanna |

| Sl. No. | Survey No. | Extent | | | Name of Pattedar (Owner) |
|---|---|---|---|---|---|
| | | Acres | Guntas | | |
| 25 | 16/2 | 1 | 09 | | Saidappa S/o Mogalappa, Bakkappa S/o Mogalappa, Mallappa S/o Mogalappa |
| 26 | 16/3 | 1 | 09 | | P. Nagamma W/o Narasappa R/o Chattarsal |
| 27 | 16/4 | 1 | 08 | | Pentamma W/o Hanmanta |
| 28 | 17/1 | 1 | 36 | | Laxmibai D/o Rachappa, Ramana S/o Chandrappa |
| | | 1 | 36 | | Mallamma W/o Chandrappa R/o Chattarsal, Neelamma W/o Veerasangappa R/o Chatrasala |
| 29 | 17/2 | 1 | 29 | | Manikappa S/o Bhogappa |
| | | 1 | 07 | | Monappa S/o Nagappa |
| | | 1 | 28 | | Siddanna Patil S/o Baswantrao Patil R/o Chattarsal |
| 30 | 18 | 2 | 09 | | Saidamma W/o Durgappa |
| | | 2 | 09 | | Basanna S/o Sayappa |
| 31 | 19 | 4 | 00 | | Venkateshwar, Mallikarjun S/o Rampappa MUG, Munnamma |
| | | 2 | 30 | | W/o Ramappa, Munnemma W/o Ramappa Krnkote Chattarsal |
| | | 2 | 00 | | Ramesh S/o Bassanna |
| | | 17 | 13 | | Channappa S/o Annarav Mali Patil |
| | | 3 | 00 | | Nirmalabai W/o Annarao |
| 32 | 20 | 1 | 26 | | Baswaraj S/o Annarao Patil |
| | | 1 | 32 | | Venkatesh S/o Ramappa, Mallikarjun, MUG Munnemma |
| 33 | 21/1 | 5 | 34 | | D/o Ramappa, Khssimsab S/o Imam Sab |
| 34 | 21/2/1 | 1 | 33 | | Murlidharrao S/o Narsingrao, Narsing Rao S/o Shridhar Rao |
| 35 | 21/2/1 | 1 | 34 | | Dilip Kumar S/o Raghavendra, Gopal Rao S/o Raghavendra |
| 36 | 21/2/3 | 1 | 34 | | Rao, Vithalrao S/o Gopalrao |
| 37 | 21/2/4 | 1 | 34 | | Shrinivasarao S/o Gopalrao |
| 38 | 21/2/5 | 1 | 34 | | Gururaj S/o Pandurangrao Patwari, Anant S/o Pandurangrao, Patwari, Santosh Kumar S/o Pandurangarao, Patwari |
| 39 | 21/2/6 | 1 | 34 | | Vamanrao S/o Gopalrao |
| 40 | 21/2/B | 1 | 34 | | Vithalrao S/o Gopalrao |
| 41 | 22/1 | 0 | 20 | | Tammanna S/o Beerappa |
| | | 2 | 18 | | Narsappa S/o Beerappa |
| 42 | 22/2 | 2 | 21 | | Beerappa S/o Narsappa |
| 43 | 22/2/5 | 1 | 18 | | Tammanna S/o Beerappa |
| | | | | | Narsappa S/o Beerappa |
| 44 | 22/2/6 | 2 | 21 | | Beerappa S/o Narsappa |
| | | 1 | 08 | | Shivaraya S/o Manikappa |

| Sl. No. | Survey No. | Extent | | | Name of Pattedar (Owner) |
|---|---|---|---|---|---|
| | | Acres | Guntas | | |
| 45 | 22/3 | 2 | 10 | | Kum. Neelamma D/o Ramanna, Susheelabai W/o Chandrappa, Sushilabai W/o Chandrappa, Erappa S/o Bakkappa |
| | | 1 | 04 | | |
| 46 | 22/4 | 1 | 11 | | Manikappa S/o Rayappa |
| 47 | 22/5/1 | 0 | 23 | | Siddappa S/o Bakkappa |
| | | 0 | 24 | | Erappa S/o Bakkappa |
| 48 | 22/5/2 | 1 | 06 | | Kum. Neelamma D/o Ramanna, Susheelabhi W/o Chandrappa |
| 49 | 22/6 | 5 | 30 | | Beerappa S/o Bichappa |
| 50 | 22/7/2 | 0 | 29 | | Kum. Neelamma D/o Ramanna, Susheelabai W/o Chandrappa |
| 51 | 22/8 | 1 | 05 | | Manikappa S/o Rayappa |
| 52 | 22/9 | 1 | 03 | | Beerappa S/o Bichappa |
| | | 1 | 03 | | Manikappa S/o Rayappa |
| | | 1 | 02 | | Beerappa S/o Narsappa |
| 53 | 22/10 | 2 | 16 | | Bhimsha S/o Tammanna R/o Chattarsal |
| 54 | 22/11 | 3 | 00 | | Beerappa S/o Narsappa |
| 55 | 23 | 6 | 30 | | Ramrao S/o Mallanrao |
| | | 6 | 31 | | Chandrashekar S/o Mallanrao |
| 56 | 24 | 0 | 09 | | Ramrao S/o Mallanrao |
| | | 5 | 10 | | Chandrashekar S/o Mallanrao |
| | | 7 | 00 | | Mohd. Ghouse S/o Mohd. Abdul Gafoor, Sab r/o Chattarsal |
| | | 2 | 00 | | Mohd. Ismail S/o Mohd. Khasimsab R/o Chattarsal |
| 57 | 25 | 7 | 13 | | Shardamma W/o Narayanreddy |
| 58 | 26/1 | 1 | 27 | | Imamsab S/o Mohdinsab |
| 59 | 26/2 | 1 | 24 | | Davalbi W/o Ghudusab |
| 60 | 26/3 | 1 | 27 | | Moinuddin S/o Hussainsab |
| 61 | 26/4 | 1 | 27 | | Mahboosab, Ghudusab |
| 62 | 27/1 | 1 | 30 | | Beerappa S/o Narsappa |
| 63 | 27/2 | 0 | 28 | | Narsappa S/o Bassappa |
| 64 | 27/3 | 0 | 27 | | Beerappa S/o Bichappa |
| | | 0 | 27 | | Siddappa S/o Bichappa |
| 65 | 27/4 | 0 | 28 | | Manikappa S/o Rayappa |
| 66 | 27/5/1 | 0 | 15 | | Bakkappa, Hussainappa |
| 67 | 28/1 | 1 | 01 | | Nagappa, Ramchandra, Bhogappa Badiger |
| 68 | 28/2 | 0 | 18 | | Laxmibai D/o Rachappa, Ramanna Chandrappa |
| | | 0 | 18 | | Mallamma W/o Chandrappa, Neelamma W/o Veersangappa |
| 69 | 29 | 3 | 03 | | R/o Chattarsal, Jagdevi W/o Baslingayya |
| | | 3 | 03 | | Ravindrabai W/o Baslingayya |

